# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 21
ಸದಸ್ಯರ ಹೆಸರು : ಶ್ರೀ. ಹೆಚ್.ಎಂ. ರಮೇಶಗೌಡ
(ವಿಧಾನ ಸಭಾ ಕ್ಷೇತ್ರದಿಂದ ಚುನಾಯಿತರಾದವರು)
ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು,
ಉತ್ತರಿಸಬೇಕಾದ ದಿನಾಂಕ : 15.02.2022

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ಅತ್ಯಂತ ಹಿಂದುಳಿದ ಜಿಲ್ಲೆಗಳ ಗ್ರಾಮೀಣ ಪ್ರದೇಶದಲ್ಲಿ ಬಡ ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ; ಈ ಬಗ್ಗೆ ಸರ್ಕಾರ ಏನು ಕ್ರಮ ಕೈಗೊಂಡಿದೆ; ( ಮಾಹಿತಿ ನೀಡುವುದು) | ಬಂದಿದೆ.<br><br>ಅಪೌಷ್ಟಿಕತೆಯನ್ನು ನಿವಾರಿಸಲು ಸರ್ಕಾರವು ತೆಗೆದುಕೊಂಡಿರುವ ಕ್ರಮ ಈ ಕೆಳಕಂಡಂತಿದೆ.<br>· ಎಲ್ಲಾ ಮಕ್ಕಳಿಗೆ ಅಂಗನವಾಡಿ ಕೇಂದ್ರದಲ್ಲಿ ಪ್ರತಿ ದಿನ ರೂ.8.00 ಮೌಲ್ಯದ ಪೂರಕ ಪೌಷ್ಟಿಕ ಆಹಾರವನ್ನು ನೀಡಲಾಗುತ್ತಿದೆ.<br>· ತೀವ್ರ ಅಪೌಷ್ಟಿಕ ಮಕ್ಕಳಿಗೆ ಪ್ರತಿ ದಿನ ರೂ.12.00 ಮೌಲ್ಯದ ಪೂರಕ ಪೌಷ್ಟಿಕ ಆಹಾರವನ್ನು ನೀಡಲಾಗುತ್ತಿದೆ.<br>· ಅಂಗನವಾಡಿಗೆ ಹಾಜರಾಗುವ 3 ವರ್ಷದಿಂದ 6 ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ.<br>· ಕ್ಷೀರಭಾಗ್ಯ ಯೋಜನೆಯಡಿ 6 ತಿಂಗಳಿಂದ 6 ವರ್ಷದ ಎಲ್ಲಾ ಅಂಗನವಾಡಿ ಮಕ್ಕಳಿಗೆ ವಾರದಲ್ಲಿ 5 ದಿನ 150 ಎಂ.ಎಲ್ ಹಾಲನ್ನು (15ಗ್ರಾಂ ಕೆನೆಭರಿತ ಹಾಲಿನಪುಡಿ, 10 ಗ್ರಾಂ ಸಕ್ಕರೆ) ನೀಡಲಾಗುತ್ತಿದೆ.<br>· 6 ತಿಂಗಳಿಂದ 3 ವರ್ಷದ ತೀವ್ರ ಅಪೌಷ್ಟಿಕ ಮಕ್ಕಳಿಗೆ ಮತ್ತು 5 ಹಿಂದುಳಿದ ಜಿಲ್ಲೆಗಳಾದ ಬೀದರ್, ಕಲಬುರಗಿ, ರಾಯಚೂರು, ಯಾದಗಿರಿ ಮತ್ತು ಕೊಪ್ಪಳ ಇಲ್ಲಿಯ ಸಾಧಾರಣ ಅಪೌಷ್ಟಿಕ ಮಕ್ಕಳಿಗೆ ವಾರದಲ್ಲಿ 3 ದಿನ ಮೊಟ್ಟೆ ಹಾಗೂ 3 ದಿನ 200 ಎಂ.ಎಲ್ ಹಾಲನ್ನು, ಮೊಟ್ಟೆ ಸ್ವೀಕರಿಸದಿರುವ ಮಕ್ಕಳಿಗೆ ವಾರದಲ್ಲಿ 6 ದಿನ ಹಾಲನ್ನು ನೀಡಲಾಗುತ್ತಿದೆ.<br><br>· 3 ವರ್ಷದಿಂದ 6 ವರ್ಷದ ತೀವ್ರ ಅಪೌಷ್ಟಿಕ ಮಕ್ಕಳಿಗೆ ಮತ್ತು 5 ಹಿಂದುಳಿದ ಜಿಲ್ಲೆಗಳಾದ ಬೀದರ್, ಕಲಬುರಗಿ, ರಾಯಚೂರು, ಯಾದಗಿರಿ ಮತ್ತು ಕೊಪ್ಪಳ ಇಲ್ಲಿಯ ಸಾಧಾರಣ ಅಪೌಷ್ಟಿಕ ಮಕ್ಕಳಿಗೆ ವಾರದಲ್ಲಿ 5 ದಿನ ಮೊಟ್ಟೆ ಹಾಗೂ 3 ದಿನ 200 ಎಂ.ಎಲ್. ಹಾಲನ್ನು, ಮೊಟ್ಟೆ ಸ್ವೀಕರಿಸದಿರುವ ಮಕ್ಕಳಿಗೆ ವಾರದಲ್ಲಿ 6 ದಿನ ಹಾಲನ್ನು ನೀಡಲಾಗುತ್ತಿದೆ.<br><br>· ತೀವ್ರ ಅಪೌಷ್ಟಿಕ ಮಕ್ಕಳಿಗೆ ಆರೋಗ್ಯ ಇಲಾಖೆಯ ಪೌಷ್ಟಿಕ ಪುನರ್ವಸತಿ ಕೇಂದ್ರ (NRC) ಗಳಲ್ಲಿ ಚಿಕಿತ್ಸೆ ನೀಡಲಾಗುತ್ತಿದೆ.<br><br>· ಆರೋಗ್ಯ ಮತ್ತು ಪೌಷ್ಟಿಕ ಶಿಬಿರಗಳನ್ನು ಏರ್ಪಡಿಸಿ ಅಧಿಕ ಪೌಷ್ಟಿಕತೆಯುಳ್ಳ ಆಹಾರಗಳನ್ನು ತಯಾರಿಸುವ ಕುರಿತು ಮತ್ತು ಮಕ್ಕಳಿಗೆ ಪೌಷ್ಟಿಕತೆಯುಳ್ಳ ಆಹಾರವನ್ನು ನೀಡಲು ತಿಳುವಳಿಕೆ ನೀಡಲಾಗುತ್ತಿದೆ.<br><br>· ಪ್ರತಿ ತಿಂಗಳು ನಡೆಸುವ ತಾಯಂದಿರ ಸಭೆಗಳಲ್ಲಿ ಅಪೌಷ್ಟಿಕತೆ ನಿವಾರಣೆ ಬಗ್ಗೆ ತೆಗೆದುಕೊಳ್ಳಬೇಕಾದ ಕ್ರಮಗಳ ಕುರಿತು ತಾಯಂದಿರುಗಳಿಗೆ ತಿಳುವಳಿಕೆ ನೀಡಲಾಗುತ್ತಿದೆ.<br><br>· ಪೋಷಣ್ ಅಭಿಯಾನ ಯೋಜನೆಯಡಿ ಪ್ರತೀ ತಿಂಗಳು ಎರಡು ಬಾರಿ |

| | | |
|---|---|---|
| | | ಸಮುದಾಯ ಆಧಾರಿತ ಚಟುವಟಿಕೆಗಳನ್ನು ನಡೆಸಲಾಗುತ್ತಿದ್ದು, ತಾಯಂದಿರಿಗೆ ಅಪೌಷ್ಟಿಕತೆ ಬಗ್ಗೆ ತಿಳಿಸಲಾಗುತ್ತಿದೆ.<br>• ಅಂಗನವಾಡಿ ಕೇಂದ್ರಗಳಲ್ಲಿ ಎಲ್ಲಾ ಮಕ್ಕಳ ಆರೋಗ್ಯ ತಪಾಸಣೆಯನ್ನು 3 ತಿಂಗಳಿಗೊಮ್ಮೆ ನಡೆಸಲಾಗುತ್ತಿದೆ. |
| ಆ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ನೌಕರರಲ್ಲಿ ಎಷ್ಟು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳ ಅಧಿಕಾರಿಗಳಿಗೆ ಬಡ್ತಿ ನೀಡಲಾಗಿದೆ; ಎಷ್ಟು ಅಧಿಕಾರಿಗಳಿಗೆ ಇನ್ನೂ ಮುಂಬಡ್ತಿ ಬಾಕಿ ಇದೆ; (ವಿವರ ನೀಡುವುದು) | ವಿವರವನ್ನು ಅನುಬಂಧ-01 ರಲ್ಲಿ ಒದಗಿಸಲಾಗಿದೆ. |
| ಇ | ರಾಜ್ಯದ ವಿವಿಧ ಭಾಗಗಳ ವಿಕಲಚೇತನರಿಗೆ ವಿತರಿಸಲಾಗಿರುವ ಟ್ರೈಸಿಕಲ್‌ಗಳ ಸಂಖ್ಯೆ ಎಷ್ಟು; ವಿಕಲಚೇತನರ ಕಲ್ಯಾಣಕ್ಕಾಗಿ ಪ್ರಸಕ್ತ ಸಾಲಿನಲ್ಲಿ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ; (ವಿವರ ನೀಡುವುದು) | ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಅನುದಾನದಡಿ ರಾಜ್ಯದ ವಿವಿಧ ಭಾಗಗಳ ವಿಕಲಚೇತನರಿಗೆ ವಿತರಿಸಲಾಗಿರುವ ಯಂತ್ರಚಾಲಿತ ದ್ವಿಚಕ್ರವಾಹನಗಳ ಸಂಖ್ಯೆ:9883 ವರ್ಷವಾರು ವಿವರ ಈ ಕೆಳಕಂಡಂತಿದೆ.<br>**ವರ್ಷ** — **ಸಂಖ್ಯೆ**<br>2014-15 — 850<br>2016-17 — 2000<br>2017-18 — 4000<br>2019-20 — 1566<br>2020-21 — 1467<br>ಒಟ್ಟು — 9883<br>2021-22ನೇ ಸಾಲಿಗೆ 1500 ಯಂತ್ರಚಾಲಿತ ದ್ವಿಚಕ್ರವಾಹನಗಳನ್ನು ಖರೀದಿಸಿ, ವಿತರಿಸುವ ಸಂಬಂಧ ಟೆಂಡರ್ ಕರೆಯಲಾಗಿದ್ದು, ಟೆಂಡರ್ ಪ್ರಕ್ರಿಯ ನಂತರ ವಿತರಿಸಲು ಕ್ರಮ ಕೈಗೊಳ್ಳಲಾಗುವುದು.<br>ವಿಕಲಚೇತನರ ಆರ್ಥಿಕ ಅಭಿವೃದ್ಧಿಗಾಗಿ ಸರ್ಕಾರದಿಂದ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ವಿವರವನ್ನು ಅನುಬಂಧ-02 ರಲ್ಲಿ ಒದಗಿಸಿದೆ. |
| ಈ | ಪ್ರಸಕ್ತ ಸಾಲಿನಲ್ಲಿ ವಿಕಲಚೇತನರ ಆರ್ಥಿಕ ಅಭಿವೃದ್ಧಿಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | |

ಸಂಖ್ಯೆ: ಮಮಇ 20 ಸ್ವೀಮರ 2022

Halappa

(ಆಚಾರ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖೆ ಸಚಿವರು

## ಅನುಬಂಧ-1

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

2020-21 ಮತ್ತು 2021-22ನೇ ಸಾಲಿನಲ್ಲಿ ಗ್ರೂಪ್ ಸಿ ವೃಂದದ ಅಧೀಕ್ಷಕರು ದರ್ಜೆ-2 ವೃಂದದಿಂದ ಅಧೀಕ್ಷಕರು ದರ್ಜೆ-1ರ ಹುದ್ದೆಗೆ ಪರಿಗಣಿಸಿದ ಮುಂಬಡ್ತಿಗಳಲ್ಲಿ ಮೀಸಲಾತಿಯನ್ವಯ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಸಂಖ್ಯೆ ಕೆಳಗಿನಂತಿದೆ.

| ವರ್ಷ | ಬಡ್ತಿಗೆ ಪರಿಗಣಿಸಿದ ಒಟ್ಟು ಹುದ್ದೆಗಳ ಸಂಖ್ಯೆ | ಪ.ಜಾ ಅಭ್ಯರ್ಥಿಗಳ ಸಂಖ್ಯೆ | ಪ. ಪಂ ಅಭ್ಯರ್ಥಿಗಳ ಸಂಖ್ಯೆ |
|---|---|---|---|
| 2020-21 | 80 | 14 | 3 |
| 2021-22 | 62 | 10 | 2 |

## ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

| ಕ್ರ ಸಂ | ಬಡ್ತಿಗೆ ಪರಿಗಣಿಸಿದ ಹುದ್ದೆ | ಮುಂಬಡ್ತಿ ಹೊಂದಿದ ಹುದ್ದೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
|---|---|---|---|---|---|
| 1 | ಪ್ರಥಮ ದರ್ಜೆ ಸಹಾಯಕರು | ಪರಿವೀಕ್ಷಣಾಧಿಕಾರಿ ದರ್ಜೆ-2 | 1 | 0 | 1 |
| 2 | ಪದವಿ ಪೂರ್ವ ಸಹಾಯಕರು | ಪದವೀಧರರ ಸಹಾಯಕರು | 2 | 0 | 2 |
| 3 | ದ್ವಿತೀಯ ದರ್ಜೆ ಸಹಾಯಕರು | ಪ್ರಥಮ ದರ್ಜೆ ಸಹಾಯಕರು | 2 | 3 | 5 |
| 4 | ಅಡುಗೆಯವರು | ದ್ವಿತೀಯ ದರ್ಜೆ ಸಹಾಯಕರು/ ವಾರ್ಡನ್ | 1 | 1 | 2 |
| 5 | ಗ್ರೂಪ್-ಡಿ | ದ್ವಿತೀಯ ದರ್ಜೆ ಸಹಾಯಕರು/ ವಾರ್ಡನ್ | 2 | 0 | 2 |
| | | | | ಒಟ್ಟು | 12 |

## ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

ಕಾರ್ಯ ನಿರ್ವಹಿಸುತ್ತಿರುವ ಒಬ್ಬ ಪರಿಶಿಷ್ಟ ಜಾತಿ ಅಧಿಕಾರಿಗೆ ಮುಂಬಡ್ತಿ ನೀಡಲಾಗಿದೆ. ಮುಂಬಡ್ತಿ ನೀಡುವ ಪ್ರಕರಣಗಳು ಯಾವುದೂ ಇರುವುದಿಲ್ಲ.

## ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಮಂಡಳಿ

ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಮಂಡಳಿಯಲ್ಲಿ ಅನುಮೋದನೆಗೊಂಡ 29 ಖಾಯಂ ಹುದ್ದೆಗಳು ಇದ್ದು, 11 ಹುದ್ದೆಗಳಲ್ಲಿ ನೌಕರರು ಕಾರ್ಯ ನಿರ್ವಹಿಸುತ್ತಿರುತ್ತಾರೆ. ಉಳಿದ 18 ಹುದ್ದೆಗಳು ಖಾಲಿ ಇರುತ್ತವೆ. ಹಿಂದೆ ಭಡ್ತಿ ನೀಡಿದ್ದ ಮೂವರು ಪರಿಶಿಷ್ಟ ಜಾತಿಯ ನೌಕರರು ಹಾಗೂ ಒಬ್ಬ ಪರಿಶಿಷ್ಟ ಪಂಗಡದ ನೌಕರರು ನಿವೃತ್ತಿಯಾಗಿರುತ್ತಾರೆ. 2002ರಿಂದ ಮಂಡಳಿಯಲ್ಲಿ ಯಾವುದೇ ಹೊಸ ನೇರ ನೇಮಕಾತಿ ಮಾಡಿರುವುದಿಲ್ಲ. ಇನ್ನುಮುಂದೆ ನೇಮಕಾತಿ ಮಾಡುವ ಸಂದರ್ಭದಲ್ಲಿ ರೋಸ್ಟರ್ ನಿಯಮದಂತೆ ಖಾಲಿ ಹುದ್ದೆಗಳನ್ನು ತುಂಬಲಾಗುವುದು.

## ಮಕ್ಕಳ ರಕ್ಷಣಾ ನಿರ್ದೇಶನಾಲಯ

ಮಕ್ಕಳ ರಕ್ಷಣಾ ನಿರ್ದೇಶನಾಲಯಕ್ಕೆ ಒಟ್ಟು 04 ಹುದ್ದೆಗಳು ಮಾತ್ರ ಮಂಜೂರಾಗಿರುತ್ತವೆ. ನಿರ್ದೇಶಕರು ಭಾ.ಆ.ಸೇ.1–ಹುದ್ದೆ, ಗ್ರೂಪ್ 'ಸಿ'–2 ಹುದ್ದೆ ಮತ್ತು ಗ್ರೂಪ್ 'ಡಿ' –1 ಹುದ್ದೆ ಮಂಜೂರಾಗಿರುತ್ತದೆ. ಅಲ್ಲದೆ ಸಮಗ್ರ ಮಕ್ಕಳ ರಕ್ಷಣಾ ಸೊಸೈಟಿಯಿಂದ ಗ್ರೂಪ್ 'ಎ'–1 ಹುದ್ದೆ ಮತ್ತು ಗ್ರೂಪ್'ಸಿ' 1 ಹುದ್ದೆ ಒಟ್ಟು ಎರಡು ಹುದ್ದೆಗಳು ಮಕ್ಕಳ ರಕ್ಷಣಾ ನಿರ್ದೇಶನಾಲಯಕ್ಕೆ ಮರು ವಿನ್ಯಾಸಗೊಂಡಿರುತ್ತವೆ.

ಸಮಗ್ರ ಮಕ್ಕಳ ರಕ್ಷಣಾ ಯೋಜನೆಯಡಿ ಕಾರ್ಯ ನಿರ್ವಹಿಸುವ ಉಳಿದ ಎಲ್ಲಾ ಹುದ್ದೆಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಒಳಪಟ್ಟಿರುತ್ತವೆ.

## ಕರ್ನಾಟಕ ಬಾಲವಿಕಾಸ ಅಕಾಡೆಮಿ

ಕರ್ನಾಟಕ ಬಾಲವಿಕಾಸ ಅಕಾಡೆಮಿ, ಧಾರವಾಡ ಕಛೇರಿಯಲ್ಲಿ 04 ಜನ ಅಧಿಕಾರಿ / ಸಿಬ್ಬಂದಿಯವರು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆ. ಅವರಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಅಧಿಕಾರಿ / ಸಿಬ್ಬಂದಿಗಳು ಯಾರೂ ಇರುವುದಿಲ್ಲ.

*******

## ಅನುಬಂಧ-02

## ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಿಂದ ವಿಕಲಚೇತನರ ಆರ್ಥಿಕ ಅಭಿವೃದ್ಧಿಗಾಗಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು/ಸೇವಾ ಸೌಲಭ್ಯಗಳು

**1. ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ಯೋಜನೆ ನಡೆಯುತ್ತಿರುವ ವಿಶೇಷ ಶಾಲೆಗಳು:**

ಈ ಯೋಜನೆಯಡಿ ಬುದ್ಧಿಮಾಂದ್ಯ (ಸೆರಬ್ರಲ್ ಪಾಲ್ಸಿ, ಆಟಿಸಂ), ದೃಷ್ಟಿದೋಷ, ಶ್ರವಣದೋಷವುಳ್ಳ ಮಕ್ಕಳಿಗಾಗಿ ವಸತಿಯುತ ಹಾಗೂ ವಸತಿರಹಿತ ಶಾಲೆಗಳು ಸೇರಿದಂತೆ ಒಟ್ಟು 141 ವಿಶೇಷ ಶಾಲೆಗಳು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಯುತ್ತಿವೆ. ಮಕ್ಕಳ ಸಂಖ್ಯೆಗೆ ಅನುಗುಣವಾಗಿ ಶ್ರವಣದೋಷವುಳ್ಳ ಹಾಗೂ ದೃಷ್ಟಿದೋಷವುಳ್ಳ ಮಕ್ಕಳ ವಸತಿಯುತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.6200/- ರಂತೆ ಹಾಗೂ ವಸತಿರಹಿತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.5200/- ರಂತೆ ಹಾಗೂ ಬುದ್ದಿಮಾಂದ್ಯ ಮಕ್ಕಳ ಮಕ್ಕಳ ವಸತಿಯುತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.6800/- ರಂತೆ ಹಾಗೂ ವಸತಿರಹಿತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ. 6000/- ರಂತೆ ವರ್ಷದಲ್ಲಿ 10 ತಿಂಗಳ ಅವಧಿಗೆ ಅನುದಾನವನ್ನು ಮಂಜೂರು ಮಾಡಲಾಗುತ್ತಿದೆ.ಈ ಅನುದಾನದಲ್ಲಿ ಶಿಕ್ಷಕರ ಗೌರವಧನ, ಮಕ್ಕಳ ಆಹಾರ ವೆಚ್ಚ, ಕಟ್ಟಡದ ಬಾಡಿಗೆ ಹಾಗೂ ನಿರ್ವಹಣಾ ವೆಚ್ಚ, ಸಮವಸ್ತ್ರ, ವೈದ್ಯಕೀಯ ವೆಚ್ಚ ಹಾಗೂ ಸಾದಿಲ್ವಾರು ವೆಚ್ಚಗಳು ಒಳಗೊಂಡಿರುತ್ತವೆ.

**2. ಅಂಗವಿಕಲ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹಧನ:**

ಈ ಯೋಜನೆಯಡಿ ಒಂದನೇ ತರಗತಿಯಿಂದ ಸ್ನಾತಕೋತ್ತರ ಪದವಿಯವರೆಗೆ ವ್ಯಾಸಂಗ ಮಾಡುತ್ತಿರುವ ಅರ್ಹ ವಿಕಲಚೇತನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಆಯಾ ಜಿಲ್ಲಾ ಕಛೇರಿಗಳ ಮೂಲಕ ಮಂಜೂರು ಮಾಡಲಾಗುತ್ತಿದೆ. 2001-02ನೇ ಸಾಲಿನಿಂದ ಈ ಯೋಜನೆಯ ಫಲಾನುಭವಿಗಳಿಗೆ ಆದಾಯ ಮಿತಿಯಿಂದ ವಿನಾಯಿತಿಗೊಳಿಸಲಾಗಿದೆ.

**3. ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ಯೋಜನೆ:**

ಸಾರ್ವತ್ರಿಕ ಪರೀಕ್ಷೆಗಳಲ್ಲಿ ಶೇಕಡ 60 ಕ್ಕಿಂತಲೂ ಹೆಚ್ಚಿನ ಅಂಕಗಳನ್ನು ಪಡೆದ ಪ್ರತಿಭಾನ್ವಿತ ವಿಕಲಚೇತನ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ನೀಡುವ ಯೋಜನೆ ಇದಾಗಿದೆ.ಈ ಯೋಜನೆಯನ್ನು 2001-02ನೇ ಸಾಲಿನಿಂದ ಬಿ.ಎಡ್, ಎಂ.ಎಡ್. ಮತ್ತು ಟಿ.ಸಿ.ಹೆಚ್. ವಿದ್ಯಾರ್ಥಿಗಳಿಗೂ ವಿಸ್ತರಿಸಲಾಗಿದೆ.

**4. ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಶುಲ್ಕ ಮರುಪಾವತಿ:**

ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಎಸ್.ಎಸ್.ಎಲ್.ಸಿ ನಂತರ ಉನ್ನತ ಶಿಕ್ಷಣ, ವೃತ್ತಿ ಶಿಕ್ಷಣ, ತಾಂತ್ರಿಕ ಶಿಕ್ಷಣ, ಸ್ನಾತಕೋತ್ತರ, ಔದ್ಯೋಗಿಕ ಶಿಕ್ಷಣಗಳಿಗೆ ನಿಯಮಾನುಸಾರ ಆಯ್ಕೆಯಾಗುವ ವಿದ್ಯಾರ್ಥಿಗಳಿಗೆ ಸರ್ಕಾರವು ನಿಗದಿಪಡಿಸಿರುವ ಪರೀಕ್ಷಾ ಶುಲ್ಕ ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾ ಶುಲ್ಕ ಹಾಗೂ ಗ್ರಂಥಾಲಯ ಶುಲ್ಕಗಳನ್ನು ಮರುಪಾವತಿಸುವ ಯೋಜನೆಯನ್ನು 2013-14ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಸೌಲಭ್ಯ ಪಡೆಯುವ ವಿದ್ಯಾರ್ಥಿಗಳಿಗೆ ಯಾವುದೇ ಆದಾಯಮಿತಿ ಇರುವುದಿಲ್ಲ.

**5. ಗ್ರಾಮೀಣ ಪುನರ್ವಸತಿ ಯೋಜನೆ:**

ಈ ಯೋಜನೆಯನ್ನು ರಾಜ್ಯದ ಎಲ್ಲಾ 30 ಜಿಲ್ಲೆಗಳ 176 ತಾಲ್ಲೂಕುಗಳಲ್ಲಿ ಅನುಷ್ಠಾನ ಗೊಳಿಸಲಾಗುತ್ತಿದೆ. ಪ್ರತಿ ಗ್ರಾಮ ಪಂಚಾಯತಿ ಅಡಿಯಲ್ಲಿ ಎಸ್.ಎಸ್.ಎಲ್.ಸಿ. ಉತ್ತೀರ್ಣ/ ಅನುತ್ತೀರ್ಣರಾದ ಸಮರ್ಥ ವಿಕಲಚೇತನರನ್ನು ಗ್ರಾಮೀಣ ಪುನರ್ವಸತಿ ಕಾರ್ಯಕರ್ತರೆಂದು ಹಾಗೂ

ತಾಲ್ಲೂಕು ಪಂಚಾಯಿತಿ ಕಚೇರಿಯಲ್ಲಿ ಸ್ಥಳೀಯ ಪದವೀಧರ ವಿಕಲಚೇತನರೊಬ್ಬರನ್ನು ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತರೆಂದು, ಸ್ಥಳೀಯ ನಗರ ಪ್ರದೇಶಗಳಲ್ಲಿ ನಗರ ಪುನರ್ವಸತಿ ಕಾರ್ಯಕರ್ತರೆಂದು ಮತ್ತು ನಿರ್ದೇಶನಾಲಯದಲ್ಲಿ ರಾಜ್ಯ ಸಂಯೋಜಕರನ್ನು ಗೌರವಧನ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲಾಗಿದೆ. ಈ ಕಾರ್ಯಕರ್ತರ ಮೂಲಕ ವಿಕಲಚೇತನರಿಗೆ ಎಲ್ಲಾ ಸೇವಾ ಸೌಲಭ್ಯಗಳನ್ನು ಅವರಿರುವ ಸ್ಥಳಗಳಲ್ಲಿಯೇ ವಿಕಲಚೇತನರ ಮೂಲಕವೇ ತಲುಪಿಸಲಾಗುವುದು.

ಪ್ರಸ್ತುತ ಗ್ರಾಮೀಣ ಪುನರ್ವಸತಿ ಕಾರ್ಯಕರ್ತರು ಹಾಗೂ ನಗರ ಪುನರ್ವಸತಿ ಕಾರ್ಯಕರ್ತರುಗಳಿಗೆ ಮಾಹೆಯಾನ ರೂ.6000/- ಗೌರವಧನವನ್ನು ಹಾಗೂ ವಿವಿದ್ದೋದ್ದೇಶ ಪುನರ್ವಸತಿ ಕಾರ್ಯಕರ್ತರುಗಳಿಗೆ ಮಾಹೆಯಾನ ರೂ.12,000/-ಗಳ ಗೌರವಧನವನ್ನು ನೀಡಲಾಗುತ್ತಿದೆ.

<u>ಮರಣ ಪರಿಹಾರ ನಿಧಿ ಯೋಜನೆ:</u> ಪ್ರಸ್ತುತ ಗ್ರಾಮೀಣ ಪುನರ್ವಸತಿ ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ಕಾರ್ಯಕರ್ತರು ನಿಧನ ಹೊಂದಿದ್ದಲ್ಲಿ ರೂ.50,000/-ಗಳ ಪರಿಹಾರ ಧನ ನೀಡಲು ಅವಕಾಶವಿರುತ್ತದೆ.

**6. ಬುದ್ಧಿಮಾಂದ್ಯ ಮಕ್ಕಳ ಪೋಷಕರಿಗೆ ವಿಮಾ ಯೋಜನೆ:**

ಬುದ್ಧಿಮಾಂದ್ಯ ಮಕ್ಕಳ/ವ್ಯಕ್ತಿಗಳ ತಂದೆ: ತಾಯಿ: ಪೋಷಕರ ವಿಮಾ ಯೋಜನೆಯನ್ನು ಭಾರತೀಯ ಜೀವ ವಿಮಾ ನಿಗಮದ ಮೂಲಕ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಬುದ್ಧಿಮಾಂದ್ಯ ಮಕ್ಕಳ/ವ್ಯಕ್ತಿಗಳ ತಂದೆ:ತಾಯಿ: ಪೋಷಕರು ಮರಣ ಹೊಂದಿದ ನಂತರ ಬುದ್ಧಿಮಾಂದ್ಯ ಮಕ್ಕಳ ಜೀವನ ನಿರ್ವಹಣೆಗಾಗಿ ರೂ.20,000/-ಗಳ ಪರಿಹಾರ ಧನವನ್ನು ಕುಟುಂಬದ ನಾಮ ನಿರ್ದೇಶಿತ ಸದಸ್ಯರಿಗೆ ಪಾವತಿಸಲಾಗುತ್ತಿದೆ.

**7. ವಿಕಲಚೇತನ ವ್ಯಕ್ತಿಗಳನ್ನು ಸಾಮಾನ್ಯರು ಮದುವೆಯಾದಲ್ಲಿ ಪ್ರೋತ್ಸಾಹ ಧನ ನೀಡುವ ಯೋಜನೆ:**

ವಿಕಲಚೇತನ ಯುವಕ/ಯುವತಿಯರನ್ನು ವಿವಾಹವಾಗುವ ಸಾಮಾನ್ಯ ಯುವಕ/ ಯುವತಿಯರಿಗೆ, ನಿರಂತರವಾಗಿ ಮಾಸಿಕ ಆದಾಯ ದೊರಕಿಸಲು ವಿಕಲಚೇತನ ವ್ಯಕ್ತಿಯ ಹೆಸರಿನಲ್ಲಿ ರೂ.50,000/-ಗಳನ್ನು ಮದುವೆಯಾದ ಸಾಮಾನ್ಯ ವ್ಯಕ್ತಿ ಹಾಗೂ ವಿಕಲಚೇತನರ ಜಂಟಿ ಹೆಸರಿನಲ್ಲಿ 05 ವರ್ಷದ ಅವಧಿಗೆ ಹೂಡಿಕೆಯ ರೂಪದಲ್ಲಿ ನೀಡಿ ಪ್ರೋತ್ಸಾಹ ನೀಡಲು ಹಾಗೂ ಅದರಿಂದ ಬರುವ ಬಡ್ಡಿ ಹಣವನ್ನು ಉಪಯೋಗಿಸುವುದು ಹಾಗೂ 05 ವರ್ಷಗಳ ನಂತರ ಠೇವಣಿ ಮೊತ್ತವನ್ನು ವಾಪಸ್ಸು ಪಡೆಯಬಹುದು ಅಥವಾ ಮುಂದುವರೆಸಲು ಅವಕಾಶವಿರುತ್ತದೆ.

**8. ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಆರೈಕೆ ಭತ್ಯೆ ಒದಗಿಸುವ ಯೋಜನೆ :**

ಅಂಧ ಮಹಿಳೆಯರು ಮಗುವಿಗೆ ಜನ್ಮ ನೀಡಿದಾಗ ಆ ಮಗುವನ್ನು ಇತರೆ ಸಾಮಾನ್ಯ ತಾಯಂದಿರಂತೆ ಆರೈಕೆ ಮಾಡುವುದು ಕಷ್ಟಕರವಾಗಿರುತ್ತದೆ.ಇಂತಹ ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಆರೈಕೆ ಮಾಡಲು ಆಯಾ ಸೇವೆ, ಆರೋಗ್ಯ ಪಾಲನೆ, ಪೌಷ್ಠಿಕ ಆಹಾರ, ಔಷಧೋಪಚಾರಗಳಿಗೆ ಮಾಹೆಯಾನ ರೂ.2000/- ದಂತೆ **5 ವರ್ಷಗಳ** ಅವಧಿಗೆ ಸಹಾಯಧನವನ್ನು ನೀಡಲಾಗುತ್ತಿದೆ.ಈ ಸೌಲಭ್ಯವನ್ನು ಕನಿಷ್ಠ 2 ಮಕ್ಕಳವರೆಗೆ ಪಡೆಯಬಹುದಾಗಿದೆ.

**9. <u>ನಿರುದ್ಯೋಗ ಭತ್ಯೆ:-</u>** ಎಸ್.ಎಸ್.ಎಲ್.ಸಿ ಹಾಗೂ ನಂತರ ವ್ಯಾಸಂಗ ಮಾಡಿರುವ ನಿರುದ್ಯೋಗಿ ವಿಕಲಚೇತನರಿಗೆ ಮಾಸಿಕ ರೂ.1000/-ಗಳ ನಿರುದ್ಯೋಗ ಭತ್ಯೆಯನ್ನು ಮಂಜೂರು ಮಾಡಲಾಗುತ್ತಿದೆ.

**10. ಅಂಗವಿಕಲರಿಗೆ ಸಾಧನ ಸಲಕರಣೆಗಳು :**

ಈ ಯೋಜನೆಯಡಿಯಲ್ಲಿ ಅಂಗವಿಕಲರಿಗೆ ಅವಶ್ಯವಾಗಿರುವ ಸಾಧನ ಸಲಕರಣೆಗಳನ್ನು ನೀಡಲಾಗುತ್ತಿದೆ. ಫಲಾನುಭವಿಯ ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ಗ್ರಾಮೀಣ ಪ್ರದೇಶದ ಫಲಾನುಭವಿಗಳಿಗೆ ರೂ.11,500/- ಮತ್ತು ನಗರ ಪ್ರದೇಶದ ಫಲಾನುಭವಿಗಳಿಗೆ ರೂ.24,000/-

ನಿಗದಿಗೊಳಿಸಲಾಗಿದೆ. ಈ ಯೋಜನೆಯಡಿ ರೂ.15,000/-ಗಳ ಮಿತಿಯೊಳಗೆ ವಿಕಲಚೇತನರಿಗೆ ಅವಶ್ಯವಿರುವ ಗಾಲಿ ಕುರ್ಚಿ, ಸಾದಾ ತ್ರಿಚಕ್ರವಾಹನ, ಕ್ಯಾಲಿಪರ್ಸ್, ಕ್ರಚಸ್, ಶ್ರವಣ ಸಾಧನ, ವೈಟ್ ಕೇನ್, ಬ್ರೈಲ್ ವಾಚ್ ಇನ್ನಿತರ ಸಲಕರಣೆಗಳನ್ನು ಉಚಿತವಾಗಿ ನೀಡಲಾಗುತ್ತಿದೆ.

11. ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ಯೋಜನೆ :

ಎಸ್.ಎಸ್.ಎಲ್.ಸಿ ನಂತರ ವ್ಯಾಸಂಗ ಮಾಡುವ ದೃಷ್ಟಿದೋಷವುಳ್ಳ ವಿಕಲಚೇತನ ವಿದ್ಯಾರ್ಥಿಗಳು ಇತ್ತೀಚಿನ ತಂತ್ರಜ್ಞಾನ ಮತ್ತು ತಂತ್ರಾಂಶದ ಉಪಯೋಗದಿಂದ ಉನ್ನತ ಶಿಕ್ಷಣವನ್ನು ಪಡೆಯಲು ಅನುಕೂಲವಾಗುವಂತೆ ಮಾತನಾಡುವ (ಟಾಕಿಂಗ್) ಲ್ಯಾಪ್‌ಟಾಪ್‌ಗಳನ್ನು ಅರ್ಹ ಫಲಾನುಭವಿಗಳಿಗೆ ನೀಡಲಾಗುತ್ತಿದೆ

12. ತೀವ್ರತರಹ ದೈಹಿಕ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರವಾಹನ ಯೋಜನೆ :

20 ರಿಂದ 60 ವರ್ಷದ ವಯೋಮಾನದ ತೀವ್ರತರವಾದ ದೈಹಿಕ ವಿಕಲಚೇತನರಿಗೆ ಓಡಾಡಲು ಅನುಕೂಲವಾಗುವಂತೆ ಜೀವಿತ ಕಾಲದಲ್ಲಿ ಒಂದು ಬಾರಿಗೆ ಯಂತ್ರಚಾಲಿತ ದ್ವಿಚಕ್ರ ವಾಹನವನ್ನು ಮಂಜೂರು ಮಾಡಲಾಗುತ್ತದೆ. ಈ ಯೋಜನೆಯಡಿ ಫಲಾನುಭವಿಯ ಕುಟುಂಬದ ವಾರ್ಷಿಕ ವರಮಾನ ರೂ.2.00 ಲಕ್ಷಗಳಿಗಿಂತ ಕಡಿಮೆ ಇರಬೇಕಾಗಿರುತ್ತದೆ.

13. ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರ ಯೋಜನೆ:-

ವಿಕಲಚೇತನರನ್ನು ಗುರುತಿಸಿ ಅವರಿಗೆ ಶೈಕ್ಷಣಿಕ, ಉದ್ಯೋಗ ಮತ್ತು ತರಬೇತಿ, ಸಾಮಾಜಿಕ ಭದ್ರತೆ ಹಾಗೂ ಪುನರ್ವಸತಿ ಸೇವೆಗಳನ್ನು ಅವರ ಮನೆ ಬಾಗಿಲಿನಲ್ಲಿಯೇ ಒದಗಿಸಿ ಅವರ ಸರ್ವಾಂಗೀಣ ಪುನರ್ವಸತಿಯನ್ನು ಕಲ್ಪಿಸುವುದು ಈ ಯೋಜನೆಯ ಪ್ರಮುಖ ಉದ್ದೇಶವಾಗಿದೆ. ಈ ಯೋಜನೆಯಡಿ ವಿಕಲಚೇತನರಿಗೆ ಅಗತ್ಯವಿರುವ ವೈದ್ಯಕೀಯ ಸೇವೆ, ವೃತ್ತಿ ಚಿಕಿತ್ಸೆ, ವಿವಿಧ ರೀತಿಯ ಸಾಧನ ಸಲಕರಣೆಗಳನ್ನು ಕೇಂದ್ರಗಳಲ್ಲಿ ತಯಾರಿಸಿ ಒದಗಿಸಲಾಗುವುದು. ಪ್ರಸ್ತುತ 16 ಜಿಲ್ಲೆಗಳಲ್ಲಿ ಜಿಲ್ಲಾ ಪುನರ್ವಸತಿ ಕೇಂದ್ರಗಳು ನಡೆಯುತ್ತಿವೆ. (ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಬೆಳಗಾವಿ, ಬೀದರ್, ಚಿತ್ರದುರ್ಗ, ದಕ್ಷಿಣ ಕನ್ನಡ, ಮೈಸೂರು, ಉಡುಪಿ, ಹಾಸನ, ವಿಜಯಪುರ, ರಾಯಚೂರು, ಚಿಕ್ಕಮಗಳೂರು, ಬಳ್ಳಾರಿ, ಹಾವೇರಿ, ಚಾಮರಾಜನಗರ, ಗದಗ)

14. ಅಂಗವಿಕಲತೆಯನ್ನು ನಿವಾರಿಸುವ ಶಸ್ತ್ರಚಿಕಿತ್ಸೆಗಾಗಿ ವೈದ್ಯಕೀಯ ಪರಿಹಾರ ನಿಧಿ ಯೋಜನೆ:-

ಅಂಗವಿಕಲ ವ್ಯಕ್ತಿಗಳಿಗೆ ಅಂಗವಿಕಲತೆಯನ್ನು ನಿವಾರಿಸಲು ಶಸ್ತ್ರ ಚಿಕಿತ್ಸೆಗಾಗಿ ಸರ್ಕಾರಿ ಆಸ್ಪತ್ರೆ, ಸಂಜಯಗಾಂಧಿ ಆಸ್ಪತ್ರೆಗಳಲ್ಲಿ ಹಾಗೂ ಸುಸಜ್ಜಿತ ಖಾಸಗಿ ಆಸ್ಪತ್ರೆಗಳಲ್ಲಿ ಅಂಗವಿಕಲತೆ ನಿವಾರಣಾ ಶಸ್ತ್ರ ಚಿಕಿತ್ಸೆಗಾಗಿ ರೂ.1.00 ಲಕ್ಷಗಳವರೆಗೆ ಸಹಾಯ ಧನವನ್ನು ಮಂಜೂರು ಮಾಡಲಾಗುತ್ತಿದೆ.

15. ಅಂಧ ವಿದ್ಯಾರ್ಥಿಗಳಿಗೆ ಬ್ರೈಲ್ ಕಿಟ್‌ಗಳ ವಿತರಿಸುವ ಯೋಜನೆ:-

ಅಂಧ ವಿದ್ಯಾರ್ಥಿಗಳು ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ಸ್ವಾವಲಂಬಿಗಳಾಗಲು ರಾಜ್ಯದ ಅಂಧ ವಿದ್ಯಾರ್ಥಿಗಳಿಗೆ ಟಾಂಕಿಗ್ ಮೊಬೈಲ್, ಬ್ರೈಲ್ ವಾಚ್, ವಾಕಿಂಗ್ ಸ್ಟಿಕ್ ಮತ್ತು ಇನ್ನಿತರ ಸಾಧನೆಗಳನ್ನು ಒಳಗೊಂಡ ತಲಾ ರೂ.25000/-ಗಳ ಕಿಟ್‌ಗಳನ್ನು ವಿತರಿಸಲಾಗುತ್ತಿದೆ.

**16. ಶ್ರವಣದೋಷವುಳ್ಳ ವ್ಯಕ್ತಿಗಳಿಗೆ ಸ್ವಯಂ ಉದ್ಯೋಗಕ್ಕಾಗಿ ಹೊಲಿಗೆ ಯಂತ್ರವನ್ನು ವಿತರಿಸುವ ಯೋಜನೆ:-**

ಶ್ರವಣದೋಷವುಳ್ಳವರು ಉದ್ಯೋಗಾವಕಾಶದಿಂದ ವಂಚಿತರಾಗುತ್ತಿರುವುದನ್ನು ಮನಗಂಡು ಅವರು ಸ್ವಯಂ ಉದ್ಯೋಗ ಕೈಗೊಂಡು ಸ್ವಾವಲಂಬಿಗಳಾಗಲು ಅನುವಾಗುವಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಶ್ರವಣದೋಷವುಳ್ಳ ವ್ಯಕ್ತಿಗಳಿಗೆ ಸ್ವಯಂ ಉದ್ಯೋಗಕ್ಕಾಗಿ ಹೊಲಿಗೆ ಯಂತ್ರವನ್ನು ವಿತರಿಸಲಾಗುತ್ತಿದೆ.

**17. ಸಾಧನೆ ಮತ್ತು ಪ್ರತಿಭೆ ಯೋಜನೆ:**

ವಿಕಲಚೇತನ ಕ್ರೀಡಾಪಟುಗಳಿಗೆ ಪ್ರೋತ್ಸಾಹ ನೀಡಿ ಧನಸಹಾಯ ನೀಡಲು "ಸಾಧನೆ" ಎಂಬ ಯೋಜನೆಯು ಜಾರಿಯಲ್ಲಿದ್ದು, ಕ್ರೀಡೆಗಳಲ್ಲಿ ವಿಶೇಷ ಸಾಧನೆಗೈದ ವಿಕಲಚೇತನರಿಗೆ ರೂ.50,000/-ಗಳ ಧನ ಸಹಾಯವನ್ನು ನೀಡಲಾಗುತ್ತಿದೆ.

ವಿಕಲಚೇತನರು ನೀಡುವ ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿ ಧನಸಹಾಯ ನೀಡುವ ಸಲುವಾಗಿ "ಪ್ರತಿಭೆ" ಎಂಬ ಯೋಜನೆಯು ಜಾರಿಯಲ್ಲಿದ್ದು, ವೈಯಕ್ತಿಕ ಸಾಂಸ್ಕೃತಿಕ ರೂ.2,000/-ಗಳು ಹಾಗೂ ಸಮೂಹ ಕಾರ್ಯಕ್ರಮಕ್ಕೆ ರೂ.10,000/-ಗಳ ಪ್ರೋತ್ಸಾಹಧನ ನೀಡಲಾಗುತ್ತದೆ.

**18. ನಿರಾಮಯ ಆರೋಗ್ಯ ವಿಮಾ ಯೋಜನೆ :**

ಬುದ್ಧಿಮಾಂದ್ಯ, ಸೆರಬ್ರಲ್ ಪಾಲ್ಸಿ, ಆಟಿಸಂ ಮತ್ತು ಬಹುವಿಧ ಅಂಗವಿಕಲತೆ ಹೊಂದಿರುವ ಪ್ರತಿ ವ್ಯಕ್ತಿ ಹಾಗೂ ಮಗುವಿಗೆ ವರ್ಷಕ್ಕೆ ನಿರಾಮಯ ಆರೋಗ್ಯ ಯೋಜನೆಯಡಿ ಒಂದು ಬಾರಿ ಪ್ರೀಮಿಯಂ ಮೊತ್ತ ರೂ.250/-ಗಳನ್ನು ಭಾರತ ಸರ್ಕಾರದಿಂದ ಗುರುತಿಸಲ್ಪಟ್ಟ ಅಧಿಕೃತ ಸಂಸ್ಥೆಯಾದ ಅಂಗವಿಕಲರ ಪುನಶ್ಚೇತನ ಸಂಸ್ಥೆ (ರಿ) (ಎ.ಪಿ.ಡಿ) ಬೆಂಗಳೂರು ರವರಿಗೆ ಪಾವತಿಸಲಾಗುವುದು. ಪ್ರತಿ ವರ್ಷ ಯೋಜನೆಯಡಿ ಬರುವ ಫಲಾನುಭವಿಗಳು ರೂ.1.00 ಲಕ್ಷಗಳವರೆಗೆ ವೈದ್ಯಕೀಯ ಸೌಲಭ್ಯ ಪಡೆಯಬಹುದಾಗಿರುತ್ತದೆ. ಈ ಮೊತ್ತದಲ್ಲಿ ರೂ.60,000/-ಗಳವರೆಗೆ ಸರ್ಜರಿ ವೆಚ್ಚ ಉಳಿದ ರೂ.40,000/-ಗಳಲ್ಲಿ ವೈದ್ಯಕೀಯ ಖರ್ಚು ಥೆರಪಿ, ಪ್ರಯಾಣ ವೆಚ್ಚಗಳನ್ನು ಒಳಗೊಂಡಿರುತ್ತದೆ.

**19. ಸ್ಪರ್ಧಾ ಚೇತನ ಯೋಜನೆ:-**

ಈ ಯೋಜನೆಯಡಿ ವಿಶೇಷ ಸಾಮರ್ಥ್ಯ/ಭಿನ್ನ ಸಾಮರ್ಥ್ಯದ ವಿದ್ಯಾವಂತ ವ್ಯಕ್ತಿಗೆಗಳಿಗೆ ಐ.ಎ.ಎಸ್./ಕೆ.ಎ.ಎಸ್. ಹಾಗೂ ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಸರ್ಕಾರದ ಇತರೆ ಇಲಾಖೆಗಳಡಿ ಗುರುತಿಸಲ್ಪಟ್ಟ ಪೂರ್ವ ಪರೀಕ್ಷಾ ತರಬೇತಿ ಕೇಂದ್ರಗಳು ಹಾಗೂ ಈ ಇಲಾಖೆಯಿಂದ ಗುರುತಿಸಲ್ಪಟ್ಟ ತರಬೇತಿ ಕೇಂದ್ರಗಳ ಮೂಲಕ ತರಬೇತಿಯನ್ನು ಉಚಿತವಾಗಿ ನೀಡಲಾಗುತ್ತಿದೆ.

*******